<u>ಕರ್ನಾಟಕ ವಿಧಾನ ಪರಿಷತ್ತು</u>

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರು : ಡಾ॥ ವೈ.ಎ ನಾರಾಯಣಸ್ವಾಮಿ
ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1850
ಉತ್ತರಿಸಬೇಕಾದ ದಿನಾಂಕ : 24.03.2020

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ | ಸಹಕಾರಿ ಸಂಘಗಳಲ್ಲಿ ಪ್ರತಿಯೊಬ್ಬ ರೈತರಿಗೂ ಸದಸ್ಯತ್ವ ನೀಡಲಾಗುತ್ತಿದೆಯೇ; | ನಗರ / ಗ್ರಾಮೀಣ ಭಾಗದಲ್ಲಿ ಸ್ಥಾಪನೆಗೊಂಡ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳಲ್ಲಿ/ ವಿವಿಧ ಸಹಕಾರ ಸಂಘ / ಬ್ಯಾಂಕುಗಳಲ್ಲಿ ಜಮೀನು ಹೊಂದಿದ ಎಲ್ಲ ಅರ್ಹ ರೈತರಿಗೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಹಾಗೂ ನಿಯಮಗಳನುಸಾರ ಸದಸ್ಯತ್ವ ಹೊಂದಲು ಅವಕಾಶವಿರುತ್ತದೆ. |
| ಆ | ಹಾಗಿದ್ದಲ್ಲಿ, ಸದಸ್ಯತ್ವ ನೀಡಲು ಅನುಸರಿಸುತ್ತಿರುವ ಮಾನದಂಡಗಳೇನು; | ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 16ರಲ್ಲಿನ ಕಾನೂನು ಪ್ರಕಾರ ಸಹಕಾರ ಸಂಘಗಳಲ್ಲಿ ಸದಸ್ಯತ್ವ ಹೊಂದಲು ಈ ಕೆಳಗಿನ ಮಾನದಂಡಗಳನ್ನು ಅನುಸರಿಸಬೇಕಾಗಿರುತ್ತದೆ.<br>1. ಭಾರತೀಯ ಕರಾರು ಅಧಿನಿಯಮ 1872ರಲ್ಲಿ ನಿಗಧಿಪಡಿಸಿದ ಅರ್ಹತೆಗಳನ್ನು ಹೊಂದಿರತಕ್ಕದ್ದು.<br>2. ಭಾರತೀಯ ನಾಗರೀಕನಾಗಿರಬೇಕು.<br>3. 18 ವರ್ಷ ವಯಸ್ಸಾಗಿರಬೇಕು.<br>4. ಯಾವುದೇ ಸಹಕಾರ ಸಂಘದ ಸದಸ್ಯನಾಗಲು ಬಯಸುವ ವ್ಯಕ್ತಿಯು, ಅಂಥ ಸಂಘದ ಸದಸ್ಯನಾಗುವುದಕ್ಕೆ ಪ್ರವೇಶ ಕೋರಿ ಲಿಖಿತ ಅರ್ಜಿಯೊಂದಿಗೆ ಸಂಘದ ಉಪವಿಧಿಯಲ್ಲಿ ನಿಗಧಿಪಡಿಸಿದ ಷೇರು ಹಣ, ಷೇರು ಫೀ ಹಾಗೂ ಪ್ರವೇಶ ಧನ ಭರಿಸಿ ಸಲ್ಲಿಸಿರಬೇಕು. |
| ಇ | ಈ ಸದಸ್ಯರಿಗೆ ಸರ್ಕಾರ ಮತ್ತು ಸಹಕಾರಿ ಸಂಘಗಳಿಂದ ದೊರೆಯುವ ಸವಲತ್ತುಗಳೇನು? | ಸಹಕಾರ ಇಲಾಖೆಯ ಮುಖಾಂತರ ಈ ಕೆಳಕಂಡ ವಿವಿಧ ಯೋಜನೆಗಳಿಂದ ಸಾಲ ಸೌಲಭ್ಯ ನೀಡಲಾಗುತ್ತಿದೆ.<br>1) <u>ಅಲ್ಪಾವಧಿ ಕೃಷಿ ಬೆಳೆ ಸಾಲ ಹಾಗೂ ಮಧ್ಯಮಾವಧಿ ಕೃಷಿ ಸಾಲ :-</u> ರೈತರಿಗೆ ಶೂನ್ಯ ಬಡ್ಡಿ ದರದಲ್ಲಿ ಅಲ್ಪಾವಧಿ ಕೃಷಿ ಬೆಳೆ ಸಾಲವನ್ನು ರೂ.3.00 ಲಕ್ಷಗಳವರೆಗೆ ಹಾಗೂ ಶೇ.3 ರ ಬಡ್ಡಿ ದರದಲ್ಲಿ ರೂ.10.00 ಲಕ್ಷಗಳವರೆಗೆ ಮಧ್ಯಮಾವಧಿ ಮತ್ತು ಧೀರ್ಘಾವಧಿ ಕೃಷಿ ಸಾಲವನ್ನು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳ ಮುಖಾಂತರ ವಿತರಿಸಲಾಗುತ್ತಿದೆ.<br>2) <u>ಬಡ್ಡಿ ಮನ್ನಾ ಯೋಜನೆ :</u>ದಿನಾಂಕ:31-01-2020 ಕ್ಕೆ ಸುಸ್ತಿಯಾಗಿರುವ ಮಧ್ಯಮಾವಧಿ ಹಾಗೂ ದೀರ್ಘಾವಧಿ ಕೃಷಿ ಮತ್ತು ಕೃಷಿ ಸಂಬಂಧಿತ ಸಾಲಗಳ ಮೇಲಿನ ಅಸಲನ್ನು ದಿನಾಂಕ:31.03.2020ರ ಒಳಗೆ ಪೂರ್ಣವಾಗಿ ಪಾವತಿಸಿದಲ್ಲಿ ಬಡ್ಡಿ ಮನ್ನಾ ಯೋಜನೆ ಜಾರಿಯಲ್ಲಿರುತ್ತದೆ.<br>3) <u>ಸ್ವ-ಸಹಾಯ ಗುಂಪುಗಳ ಸಾಲ:-</u> ಸ್ವ-ಸಹಾಯ ಮಹಿಳಾ ಗುಂಪುಗಳಿಗೆ ಶೂನ್ಯ ಬಡ್ಡಿ ದರದಲ್ಲಿ ರೂ.5.00 ಲಕ್ಷಗಳವರೆಗೆ ಹಾಗೂ ಪುರುಷ ಗುಂಪುಗಳಿಗೆ ರೂ.5.00 ಲಕ್ಷಗಳವರೆಗೆ ಶೇ.4 ರ ಬಡ್ಡಿ ದರದಲ್ಲಿ ಸಾಲ ವಿತರಿಸಲಾಗುತ್ತಿದೆ. ಹೈನುಗಾರಿಕೆ ಉದ್ದೇಶಕ್ಕಾಗಿ ಮಾತ್ರ ರೂ.5.00 ಲಕ್ಷದಿಂದ ರೂ.10.00 |

| | | |
|---|---|---|
| | | ಲಕ್ಷಗಳವರೆಗೆ ಶೇ.4 ರ ಬಡ್ಡಿ ದರದಲ್ಲಿ ಸಾಲ ವಿತರಿಸಲಾಗುತ್ತಿದೆ.<br>4) **ಸಾಲ ಮನ್ನಾ-2017:-** ಈ ಯೋಜನೆಯ ರೀತ್ಯಾ ಬ್ಯಾಂಕಿನಿಂದ ಹಾಗೂ ಸಹಕಾರ ಸಂಸ್ಥೆಗಳ ಮೂಲಕ ಅಲ್ಪಾವಧಿ ಬೆಳೆ ಸಾಲ ಪಡೆದು ದಿ:20-06-2017 ಕ್ಕೆ ಹೊಂದಿರುವ ಹೊರಬಾಕಿಯಲ್ಲಿ ರೂ.50,000/- ಗಳವರೆಗಿನ ಸಾಲ ಮನ್ನಾ ಆಗಿರುತ್ತದೆ.<br>5) **ಸಾಲ ಮನ್ನಾ-2018:-** ಸಹಕಾರ ಸಂಘ/ ಸಹಕಾರ ಬ್ಯಾಂಕುಗಳಿಂದ ಅಲ್ಪಾವಧಿ ಬೆಳೆ ಸಾಲ ಪಡೆದು ದಿ:10-07-2018 ಕ್ಕೆ ಹೊಂದಿರುವ ಹೊರಬಾಕಿಯಲ್ಲಿ ಕುಟುಂಬಕ್ಕೆ ಗರಿಷ್ಟ ರೂ.1.00 ಲಕ್ಷದವರೆಗಿನ ಸಾಲ ಮನ್ನಾ ಯೋಜನೆ ಜಾರಿಯಲ್ಲಿರುತ್ತದೆ.<br>6) **ಬಡವರ ಬಂಧು ಯೋಜನೆ-** ರಾಜ್ಯದ ನಗರ ಪ್ರದೇಶಗಳಲ್ಲಿನ ನೋಂದಾಯಿತ ಬೀದಿ ವ್ಯಾಪಾರಿಗಳು ಹಾಗೂ ಸಣ್ಣ ವ್ಯಾಪಾರಿಗಳಿಗೆ ಸಹಕಾರ ಬ್ಯಾಂಕುಗಳ ಮೂಲಕ ಶೂನ್ಯ ಬಡ್ಡಿ ದರದಲ್ಲಿ ಗರಿಷ್ಠ ರೂ.10,000/- ರವರೆಗೆ ಕಿರು ಸಾಲವನ್ನು ವಿತರಿಸಲಾಗುತ್ತಿದೆ.<br>7) **ಕಾಯಕ ಯೋಜನೆ:-** ಸಹಕಾರ ಬ್ಯಾಂಕುಗಳ ಮೂಲಕ ಸ್ವಸಹಾಯ ಗುಂಪುಗಳ ಸದಸ್ಯರು ಸ್ವಂತ ಉದ್ಯೋಗವನ್ನು ಕೈಗೊಳ್ಳಲು ರೂ.10.00 ಲಕ್ಷಗಳವರೆಗೆ ಸಾಲವನ್ನು ಒದಗಿಸಲಾಗುತ್ತಿದೆ. ಇದರಲ್ಲಿ ಮೊದಲ ರೂ.5.00 ಲಕ್ಷದವರೆಗಿನ ಸಾಲವನ್ನು ಶೂನ್ಯ ಬಡ್ಡಿ ದರದಲ್ಲಿ ಹಾಗೂ ರೂ.5.00 ಲಕ್ಷದಿಂದ ರೂ.10.00 ಲಕ್ಷಗಳವರೆಗಿನ ಸಾಲವನ್ನು ಶೇ.4 ರ ಬಡ್ಡಿ ದರದಲ್ಲಿ ವಿತರಿಸಲಾಗುತ್ತಿದೆ.<br>8) **ಗೃಹಲಕ್ಷ್ಮೀ ಬೆಳೆಸಾಲ:** ಜಮೀನು ಹೊಂದಿರುವ ಸಣ್ಣ ಮತ್ತು ಅತಿ ಸಣ್ಣ ರೈತರಿಗೆ ಆಭರಣಗಳ ಮೇಲೆ ರೂ.2.00 ಲಕ್ಷಗಳವರೆಗೆ ಶೇ.3 ರ ಬಡ್ಡಿದರದಲ್ಲಿ ಬೆಳೆ ಸಾಲವನ್ನು ವಿತರಿಸಲಾಗುತ್ತಿದೆ. |

**ಸಂಖ್ಯೆ: ಸಿಒ 153 ಸಿಎಲ್ಎಸ್ 2020**

(ಎಸ್.ಟಿ ಸೋಮಶೇಖರ್)
ಸಹಕಾರ ಸಚಿವರು